ನವೆಂಬರ್ – 2020

## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಹರೀಶ್ ಎನ್.

**ಪರಿಷ್ಕರಣೆ**

ಮುರಳಿ ಎಸ್.

ಶಿವಕುಮಾರಸ್ವಾಮಿ ಎಂ.

**ಕರಡು ತಿದ್ದುಪಡಿ**

ಡಾ.ದೀಪಕ್ ಬಿ., ಮೈಸೂರು




© ಹಯಾತ್ ವೊಹಮ್ಮದ್

# ಬೆಜ್ಜಲು

**ಸಾಮಾನ್ಯ ಹೆಸರು : Axle wood**

**ವೈಜ್ಞಾನಿಕ ಹೆಸರು : *Anogeissus latifolia***



© ಮಹದೇವ ಕೆ. ಸಿ. ಬೆಜ್ಜಲು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಬೆಜ್ಜಲು ಅಥವಾ ದಿಂಡಲು ಎಂದು ಕರೆಯುವ ಈ ಮರವು ಭಾರತ, ಮಯನ್ಮಾರ್, ಶ್ರೀಲಂಕಾ ದೇಶಗಳ ಎಲೆ ಉದುರುವ ಶುಷ್ಕ ಕಾಡುಗಳಲ್ಲಿ ಕಂಡುಬರುವ ಸುಮಾರು ಇಪ್ಪತ್ತು ಮೀಟರ್ ಎತ್ತರದವರೆಗೂ ಬೆಳೆಯುವ ಮರವಾಗಿದೆ. ಬೂದು ಅಥವಾ ಹಳದಿ ಮಿಶ್ರಿತ ಬೂದು ಬಣ್ಣದ ನಯವಾದ ತೊಗಟೆಯನ್ನು ಹೊಂದಿದ್ದು; ಗಾಢ ಹಸಿರು ಬಣ್ಣದ ಸರಳ ಹಾಗು ಪರ್ಯಾಯ ಎಲೆಗಳನ್ನು ಹೊಂದಿದೆ. ಏಪ್ರಿಲ್ ನಿಂದ ನವೆಂಬರ್ ತಿಂಗಳುಗಳಲ್ಲಿ ಸಣ್ಣ ತಿಳಿ ಹಳದಿ ಬಣ್ಣದ ಹೂಗಳನ್ನು ಬಿಡುತ್ತದೆ. ಇದರ ದಾರವು ಗಡಸಾಗಿ ಬಲಯುತವಾಗಿರುವುದರಿಂದ ಇದರ ನಾರೂ ಹಾಗೂ ಮರವೂ ಗಟ್ಟಿಯಾಗಿರುತ್ತದೆ. ಈ ಮರವನ್ನು ಗಾಡಿ ಕಂಬಗಳಿಗೆ, ಕೊಡಲಿ ಕಾವುಗಳಿಗೆ, ಕೃಷಿ ಉಪಕರಣಗಳಿಗೆ, ದೋಣಿ ನಿರ್ಮಾಣಕ್ಕೆ ಉಪಯೋಗಿಸಲಾಗುತ್ತದೆ. ಇದರಿಂದ ಉತ್ಕೃಷ್ಟ ಸೌದೆ ಹಾಗೂ ಇದ್ದಿಲು ದೊರಕುವುದು. ಇದರ ಕಾಂಡದಿಂದ ಬರುವ ಅಂಟು ಕ್ಯಾಲಿಕೊ ಮುದ್ರಣದಲ್ಲಿ ಬಳಸಲ್ಪಡುತ್ತದೆ. ಹಲ್ಲು ನೋವು, ವಾಂತಿ, ಬೇಧಿ ಮೊದಲಾದ ಖಾಯಿಲೆಗಳ ಶಮನಕ್ಕೆ ಈ ಬೆಜ್ಜಲು ಮರದ ಭಾಗಗಳನ್ನು ಆಯುರ್ವೇದ ಔಷಧದಲ್ಲಿ ಬಳಸುತ್ತಾರೆ.




# ಮಳೆಕಾಡಿನಲ್ಲೊಂದು ಸುತ್ತು

ಇದು ರೀಡರ್ಸ್ ಡೈಜೆಸ್ಟ್ 1996 ರಲ್ಲಿ ಪ್ರಕಟಿಸಿದ `Mysteries of the rain forest' ಎಂಬ ಪುಸ್ತಕದ ಆಯ್ದ ಭಾಗಗಳ ಭಾವಾನುವಾದ. ಇಂದಿಗೆ ಎಷ್ಟೋ ಹೊಸ ಜೀವಿಗಳ ಉಗಮವಾಗಿ, ಅಂದು ಇದ್ದ ಇನ್ನೆಷ್ಟೋ ಜೀವಿಗಳು ನಶಿಸಿ, ಕಾಲದ ಪರದೆಗಳು ಹಿಂದೆ ಸರಿದು ಹೋಗಿವೆ. ಹೆಚ್ಚು ಕಡಿಮೆ ಪ್ರಕೃತಿಯ ಲೆಕ್ಕಾಚಾರವು ಇಂದಿಗೂ ಅದೇ ಆಗಿದ್ದರೂ, ಮನುಷ್ಯನ ಮಧ್ಯಸ್ಥಿಕೆಯಿಂದ ಆ ಲೆಕ್ಕಾಚಾರವು ಸ್ವಲ್ಪ ತಪ್ಪಿದ್ದಿದೆ, ಯಾಕೆಂದರೆ ದಕ್ಷಿಣ ಅಮೇರಿಕಾ, ಆಗ್ನೇಯ ಏಷ್ಯಾ ಕಾಡುಗಳು ಇವತ್ತಿಗೆ ಬರಿದಾಗುತಲಿದೆ. ಹೀಗಾಗಿಯೇ ಸರಾಸರಿ ಮಳೆಯ ಪ್ರಮಾಣವೂ ಕಡಿಮೆಯಾಗಿದೆ. ತನ್ನದೇ ಸಮತೋಲನದಲ್ಲಿ ಜೀವ ಜಾಲವನ್ನು ತೂಗಿಸಿಕೊಂಡು, ಪ್ರಕೃತಿಯ ವೈಶಿಷ್ಟ್ಯತೆಗಳೆಲ್ಲವನ್ನು ತನ್ನಲ್ಲಿ ಹಾಸುಹೊಕ್ಕಾಗಿರಿಸಿಕೊಂಡಿರುವ ಮಳೆಕಾಡನ್ನುಪರಿಚಯಿ ಸುವ ಹಂಬಲವೇ ಈ ಲೇಖನ.

ಗುಡುಗೊಂದು ಘರ್ಜಿಸಿ ಇನ್ನೇನು ಮುಂದೆ ಬರುವ ಮಹಾಮಳೆಯ ಮುನ್ಸೂಚನೆ ನೀಡುತಿದೆ; ಕಾಡಿನತ್ತ ಕಣ್ಣು ಹಾಯಿಸಿದರೆ ಮರದ ಕೊಂಬೆಗಳು ಆಗಷ್ಟೇ ಆರಂಭವಾದ ಗಾಳಿಗೆ ಪ್ರತಿಕ್ರಿಯೆ ನೀಡಲೇಬೇಕಾ? ಎಂದು ಕೇಳುವಂತೆ ಒಂದಕ್ಕೊಂದು ಢಿಕ್ಕಿ ಹೊಡೆಯುತಲಿವೆ. ಇದರಲ್ಲಿ ಸೋತ ಕೊಂಬೆಗಳ ಎಲೆಗಳು ಒಂದಷ್ಟು ಗಾಳಿಗೆ ತೂರಿ, ಮನಸ್ಸಿಲ್ಲದೆ ಕೆಳಗೆ ಇಳಿಯುತ್ತಿವೆ. ಆದರೆ ಅದೇ ಕಾಡಿನ ಬುಡದಲ್ಲಿ ಇನ್ನೂ ಏನೂ ಆಗಿಲ್ಲವೇನೋ ಎಂಬಂತೆ ಎಲ್ಲವೂ ಸ್ತಬ್ಧ. ಮುಂದೆ ಏನೋ ಇನ್ನೂ ಏನಾದರೂ ಆಗಬಹುದೇನೋ ಎಂಬ ಬಹು ದೊಡ್ಡ ನಿರೀಕ್ಷೆಯಲ್ಲಿ ಕಾಡು ಎಲ್ಲವನ್ನೂ ತನ್ನ ಉಸಿರಿನಲ್ಲಿ ಬಿಗಿಹಿಡಿದಿದೆ. ಮೊದಲ ಹನಿಗಳು ಹಸಿರು ಚಪ್ಪರದಿಂದ ಕೆಳಗಿಳಿಯಲು ಉತ್ಸುಕತೆಯಿಂದ ಕಾಯುತ್ತಿದ್ದರೆ, ಇತ್ತ ಕಾಡಿನ ನೆಲದಲ್ಲಿ ನಮಗೂ, ಇದಕ್ಕೂ ಸಂಬಂಧವಿಲ್ಲ ಎನ್ನುವಂತೆ ಎಲ್ಲವೂ ಸಹಜ. ಏಕೆಂದರೆ ಇಲ್ಲಿ ಯಾವುದಕ್ಕೂ ಅವಸರವಿಲ್ಲ, ಅಂತೆಯೇ ಎಲ್ಲವೂ ವಿಳಂಬ. ಇದರಲ್ಲಿ ಯಾವುದೂ



ಹೊಸತಲ್ಲ, ಆದರೆ ಎಲ್ಲವೂ ನಿತ್ಯ ನೂತನ. ಇಂದು ಇದ್ದದ್ದು ನಾಳೆ ಇರಬೇಕೆಂದಿಲ್ಲ, ಹಾಗಂತ ನಾಳೆಯ ಇರುವಿಕೆಯ ಬಗ್ಗೆ ಇಂದೇ ಊಹಿಸಲೂ ಅಸಾಧ್ಯ.




ಇನ್ನೂ ಸ್ವಲ್ಪ ಸಮಯ ಸರಿಯುತ್ತಿದ್ದಂತೆ, ಎಲೆಗಳ ಬದಿಯಿಂದ ಒಂದೊಂದೇ ಸ್ತರ ಇಳಿದು ನೋಡು ನೋಡುತ್ತಿದ್ದಂತೆಯೇ ರೆಂಬೆ ಕೊಂಬೆಗಳನ್ನು ಸವರುತ್ತಾ, ಮಳೆಹನಿ ಧರೆಗಿಳಿಯಲು ಸಜ್ಜಾಗುತ್ತದೆ. ಹೀಗೆ ಕಪಟತನದಿಂದಾದರೂ ಧರೆಯನ್ನು ಸ್ಪರ್ಶಿಸಿಯೇ ತೀರುತ್ತೇನೆ ಎಂಬಂತೆ ಕಾಡಿನ ನೆಲದ ಮೇಲಿನ ಎಲೆಗಳ ರಾಶಿಯನ್ನು ಬಂದು ತಾಕುತ್ತದೆ. ಈ ಒಂದು ನಾಟಕ ಪ್ರದರ್ಶನಗೊಂಡು ಮುಗಿಯುತ್ತಿದ್ದಂತೆ, ಏನೂ ಆಗೇ ಇಲ್ಲ ಎಂಬಂತೆ ಮತ್ತೆ ಎಲ್ಲವೂ ಸ್ತಬ್ಧ. ಎಲ್ಲಾ ಅಡೆತಡೆಗಳನ್ನು ದಾಟಿ ನಾಜೂಕಾಗಿ ಹನಿ ಧರೆಗುರುಳುವ ಸಣ್ಣ ಶಬ್ದ ಹೊರತುಪಡಿಸಿದರೆ, ಎಲ್ಲವೂ ಸ್ಥಿರ. ಹೀಗಿರುವಾಗ, ಇಲ್ಲಿ ಏನಾಗುತ್ತಿರಬಹುದು ಎಂದು ನೋಡಲು ಸೂರ್ಯ ಇಣುಕಿ ಮೋಡದಿಂದ ಹೊರ ಬರುತ್ತಿದ್ದಂತೆ, ಭೂಮಿಯ ಮೇಲಿನ ನೆಲವನ್ನು ಸ್ಪರ್ಶಿಸಲು ಹವಣಿಸುತ್ತಿದ್ದ ಎಷ್ಟೋ ಹನಿಗಳು, ಅವಕಾಶ ವಂಚಿತರಾಗಿ ನಿರಾಸೆಯಿಂದ ಆವಿಯಾಗಲು ಸಜ್ಜಾಗುತ್ತವೆ. ಹೀಗೆ ಎಲೆಗಳ ಮೇಲಿದ್ದ ಮಳೆಹನಿಯಿಂದ



ಸೃಷ್ಟಿಯಾದ ಮಂಜು ಈಗ ಮತ್ತೊಂದು ಹೊಸ ಲೋಕವನ್ನು ಅನಾವರಣಗೊಳಿಸುತ್ತದೆ. ಇದೆಲ್ಲ ಒಂದೆಡೆ ನಡೆಯುತ್ತಿದ್ದರೆ, ಇನ್ನೊಂದೆಡೆ ಹುಳಹುಪ್ಪಟೆಗಳ ಝೇಂಕರಿಸುವ, ಗುಯಿಗುಡುವ ಸದ್ದು ಮೆಲ್ಲನೆ ಆರಂಭವಾಗುತ್ತದೆ.

**ಜೀವಧಾರೆ- ಮಳೆ:**

ಮಳೆಕಾಡು ಒಂದು ಅದ್ಭುತ ಜೀವಜಗತ್ತಾಗಲು ನೀರೇ ಮೂಲ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಎಡಬಿಡದೆ ದಿನವಿಡೀ ಸುರಿಯುವ ಮಳೆ, ಚಿಕ್ಕ-ದೊಡ್ಡ ತೊರೆಗಳಿಗೆ ಜೀವ ತುಂಬಿ, ನಂತರ ಇವುಗಳು ಕಾಡನ್ನು ಬೇಧಿಸಿ ಹರಿಯುತ್ತಾ, ಕಾಡು ತನಗೆ ಸೇರಿದ್ದು ಎಂಬಂತೆ ವ್ಯಾಪಿಸುತ್ತದೆ. ಒಂದು ಇಂಚಿಗೂ ಹೆಚ್ಚಿನ ಮಳೆ ಕೆಲವೇ ಗಂಟೆಗಳಲ್ಲಿ ಬಂದು ಸುರಿದು ಹೋಗುತ್ತದೆ. ಒಂದಕ್ಕಿಂದ ಒಂದು ಋತುಮಾನ ನೆಲವನ್ನು ಒದ್ದೆಯಾಗಿಸಲು ತವಕಿಸುತ್ತದೆ ಹೊರತು ಎಂದಿಗೂ ಮಳೆ ಇಲ್ಲದ, ಒಣ ಹವಾಮಾನಕ್ಕೆ ಆಸ್ಪದ ನೀಡುವುದಿಲ್ಲ.




ಮೊದಲೇ ಹೇಳಿದಂತೆ ಎಷ್ಟೋ ಮಳೆಗಳಲ್ಲಿ ನೀರ ಹನಿಗಳು ಕಾಡಿನ ನೆಲವನ್ನು ಸ್ಪರ್ಶಿಸದೇ ಮರೆಯಾಗುತ್ತವೆ. ಅಲ್ಲಲ್ಲೇ ವಿವಿಧ ಸ್ತರಗಳ ಎಲೆಗಳ ಹಾಸಿನಲ್ಲಿ ಕಾಯುತ್ತ ನಿಂತ ಹನಿಗಳನ್ನು, ಇತ್ತ ಮಹಾಮಳೆ ಮುಗಿಯುತ್ತಿದ್ದಂತೆ ನೆತ್ತಿಗೇರುವ ಉಷ್ಣವಲಯದ ಶಾಖ ಆವಿಯಾಗಿಸುತ್ತದೆ. ಮತ್ತೆ ಕಾಡಿನಿಂದ ಮೇಲೆದ್ದು ಬಾಷ್ಪೀಕರಣಗೊಂಡು ತಣ್ಣಗಿನ ಗಾಳಿಯನ್ನು ಸೀಳಿ ಮತ್ತೆ ಮೋಡವಾಗಿ ಮಾರ್ಪಾಡಾಗುತ್ತದೆ. ಭೂ ಸ್ಪರ್ಶಿಸಲಾಗದೆ ನಿರಾಸೆಗೊಂಡಿದ್ದ ಅದೇ ಹನಿಗಳು ಅಲ್ಲೇ ಮಳೆಯಾಗಿ ಬೀಳುವ ಅವಕಾಶ

ಗಿಟ್ಟಿಸಿಕೊಂಡರೂ ಆಶ್ಚರ್ಯವೇನಿಲ್ಲ. ಒಟ್ಟಿನಲ್ಲಿ ದಟ್ಟ ಕಾಡಿನ ಮೇಲ್ಮಾವಣಿಯಲ್ಲಿ, ಅಲ್ಲಿನ ವಾತಾವರಣ ತೇವಾಂಶವನ್ನು ಮೇಲಿಂದ ಕೆಳಗೆ, ಕೆಳಗಿಂದ ಮೇಲೆ ಹೋಗುವಂತೆ ಮಾಡಿ, ಮಳೆ ಮತ್ತು ಆವಿಯ ನಡುವೆ ಒಂದು ಲಯಬದ್ಧ ಸಮ್ಮಿಲನಕ್ಕೆ ಸಾಕ್ಷಿಯಾಗುತ್ತದೆ.

ಈ ಮಳೆಕಾಡುಗಳು ಜಗತ್ತಿನ ಶೇಕಡಾ 6 ರಷ್ಟು ಭೂಭಾಗವನ್ನು ಮಾತ್ರ ಆವರಿಸಿದೆ. ಮುಖ್ಯವಾಗಿ ಆಫ್ರಿಕಾ, ದಕ್ಷಿಣ ಅಮೇರಿಕಾ, ಮಧ್ಯ ಅಮೇರಿಕಾ, ಆಗ್ನೇಯ ಏಷ್ಯಾ,, ಆಸ್ಟ್ರೇಲಿಯಾ ಹಾಗೂ ನ್ಯೂಗಿನಿಯಾದಲ್ಲಿ ಕಂಡುಬರುತ್ತವೆ. ಮಳೆ ಕಾಡು ಎಂದು ಗುರುತಿಸಲ್ಪಡುವುದೇ ವರ್ಷಕ್ಕೆ ಸರಾಸರಿ 80 ಇಂಚಿಗಿಂತ ಹೆಚ್ಚು ಮಳೆ ಬೀಳುವ ಜಾಗಗಳಲ್ಲಿ. ಮನುಷ್ಯ ಹಸ್ತಕ್ಷೇಪ ಮಾಡದೇ ಇರುವ ಇನ್ನೂ ಒಂದಷ್ಟು ಭೂ ಪ್ರದೇಶಗಳು ಈ ಭೂಮಿ ಮೇಲಿದ್ದು, ಅದನ್ನು ಇಂದಿಗೂ ಪ್ರಧಾನವಾದ ತಗ್ಗು ಪ್ರದೇಶದ ಮಳೆಕಾಡುಗಳೆಂದು ಕರೆಯಲಾಗುತ್ತದೆ.




ಉಷ್ಣವಲಯದ ಕಾಡುಗಳೆಂದರೆ ಕಣ್ಣೆದುರಿಗೆ ಬರುವುದು ಎತ್ತರೆತ್ತರದ ಮರಗಳು. ಇವು ಸಾಕಷ್ಟು ಎಲೆಗಳನ್ನು ವರ್ಷವಿಡೀ ಕಾಯ್ದಿರಿಸಿಕೊಂಡೇ ಇರುತ್ತವೆ. ಹೀಗಾಗಿ ಹಸಿರಿನ ಚಾದರವನ್ನು ನಿರಂತರವಾಗಿ ಕಾಡುಗಳು ಹೊದ್ದಿರುತ್ತವೆ. ಅಲ್ಲದೆ ಇಲ್ಲಿನ ಮರಗಳು ಅಸಾಧ್ಯ ಗತಿಯಲ್ಲಿ ಬೆಳೆಯುತ್ತವೆ. ನಾ ಮುಂದು, ತಾ ಮುಂದು ಎಂದು ಉತ್ತುಂಗಕ್ಕೇರಲು ಹವಣಿಸುತ್ತಿರುವ ಈ ಮರಗಳ ಕಾಂಡಗಳನ್ನು ಬಿಗಿದಪ್ಪುವ ಬಳ್ಳಿಗಳು, ಜೋತು ಬಿದ್ದಿರುವ ಪಾಚಿ, ಅನಿಶ್ಚಿತವಾಗಿ ಬೆಳೆದಿರುವ ಆರ್ಕಿಡ್, ಫರ್ನ್ ಗಳು ಮತ್ತಷ್ಟು ಅಲಂಕರಿಸುತ್ತದೆ. ಇನ್ನು ಬೃಹದಾಕಾರವಾಗಿ ಬೆಳೆದ ಈ ಮರಗಳನ್ನು ಸಲಹುವುದೇ, ಕಾಲನ್ನು ಚಾಚಿ ಕುಳಿತಂತೆ ಕಾಣುವ ದೈತ್ಯಾಕಾರದ ಬೇರುಗಳು. ಮಧ್ಯಪ್ರಾಚೀನ ಕಾಲದ ಕ್ಯಾಥೆಡ್ರೆಲ್ ಗಳಂತೆ ತೋರುವ ಇವು ಮನುಷ್ಯನಿಗಿಂತ ದುಪ್ಪಟ್ಟು ಎತ್ತರಕ್ಕಿದ್ದು ಕಾಡಿನುದ್ದಕ್ಕೂ ತಲೆ ಎತ್ತಿ ನಿಂತಿರುತ್ತವೆ!

ಇಲ್ಲಿ ಒಂದೆಡೆ ಗೊಬ್ಬರವಾಗಿ ಕೊಳೆಯುತ್ತಿರುವುದರ ವಾಸನೆ ಮೂಗಿಗೆ ತಾಗುತ್ತಿದ್ದರೆ, ಇನ್ನೊಂದೆಡೆ ಹೊರಹೊಮ್ಮುವುದು ಮಳೆ ಭೂಮಿಗೆ ಸ್ಪರ್ಶಿಸುವುದರಿಂದ ಬೀರುವ ಘಮ. ಮತ್ತೊಂದೆಡೆ ಅಮಲೇರಿಸುವ, ಆಗಷ್ಟೇ ವಿಕಸಿತಗೊಳ್ಳುತ್ತಿರೋ ಹೂವಿನ ಪರಿಮಳ. ಇದು ಗಾಳಿಯನ್ನು ಸೇರಿ, ಪರ್ಯಟನೆ ಹೊರಟು, ಎತ್ತಲೋ ಹೋಗಬೇಕೆಂದಿದ್ದ ಕ್ರಿಮಿಕೀಟಗಳನ್ನು ಪರಾಗಸ್ಪರ್ಶಕ್ಕೆ ಆಹ್ವಾನಿಸುತ್ತದೆ. ಒಂದು ಅದ್ಭುತ ಚಿತ್ರವನ್ನು ತೆಗೆದು ಮಳೆಕಾಡೆಂದರೆ ಹೀಗೆ ಎಂದು ಮಳೆಕಾಡಿನ ಸೊಬಗನ್ನು ಉಣಬಡಿಸುವುದು ಒಂದು ಊಹೆಯಷ್ಟೇ. ಏಕೆಂದರೆ ಮಳೆಕಾಡಿನ ಸರ್ವಸಾರ ಇರುವುದೇ ಅದರ ತರೇವಾರಿ ಪರಿಮಳ ಹಾಗೂ ಅಲ್ಲಿ ಹೊರಹೊಮ್ಮುವ ಶಬ್ದದಲ್ಲಿ, ಅಲ್ಲಿನ ಶಾಖ ಮತ್ತು ತೇವದಲ್ಲಿ ದೈತ್ಯಾಕಾರವಾಗಿ ವಕ್ರ ವಕ್ರವಾಗಿ ಬೆಳೆದಿರುವ ಮರಗಳ ರೆಂಬೆ-ಕೊಂಬೆಗಳಲ್ಲಿ. ಇನ್ನು ಅದನ್ನು ಅನುಭವಿಸುವ ಹೃದಯಕ್ಕೆ ಅದು ತನ್ನ ಭಾಷೆಯನ್ನೂ ಕಲಿಸುತ್ತದೆ.




ಹಾಗೆ ಒಂದು ಕ್ಷಣ ದಿಟ್ಟಿಸಿ ನೋಡಿದರೆ ಒಂದೇ ನೋಟಕ್ಕೆ ಯಾವ ಜೀವಿಯೂ ಗೋಚರಿಸದಿರಬಹುದು. ಮತ್ತೆ ಇಲ್ಲಿ ಎಷ್ಟೋ ಜೀವಿಗಳು ಹೊರಗಿನ ಪ್ರಪಂಚಕ್ಕೆ ಕಾಲಿಟ್ಟು ತಮ್ಮ ನಿತ್ಯ ಪಾಳಿಯನ್ನು ಆರಂಭಿಸುವುದೇ ರಾತ್ರಿಯಲ್ಲಿ. ರಾತ್ರಿಯಾಗುತ್ತಿದ್ದಂತೆ ಹೇಳಿದ್ದನ್ನೇ ಒಂದೇ ಸಮನೆ ಮತ್ತೆ ಮತ್ತೆ ನಾ ಮೊದಲು, ತಾ ಮೊದಲು ಎಂದು ಹೇಳುವ ಜೀರುಂಡೆ ಸಂಗೀತ, ನಿಲ್ಲಿಸದೆ ವಟಗುಟ್ಟುವ ಕಪ್ಪೆಗಳು, ಅಲ್ಲೊಮ್ಮೆ ಇಲ್ಲೊಮ್ಮೆ ತಮ್ಮ ಇರುವಿಕೆಯನ್ನು ಖಚಿತಪಡಿಸುವ ಗೂಬೆ, ಇನ್ನೂ ಹೆಸರು ಗೊತ್ತಿಲ್ಲದ, ಹೆಸರೇ ಇರಿಸಿಕೊಂಡಿರದ ಕ್ರಿಮಿಕೀಟಗಳು ತಮ್ಮ ಇರುವಿಕೆಯನ್ನು ಪ್ರಸ್ತುತಪಡಿಸಿ ಮರೆಯಾಗುತ್ತವೆ. ಅತ್ತ ಅಮೆಜಾನ್ ಕಾಡುಗಳಲ್ಲಿ ಸೂರ್ಯಾಸ್ತವಾಗುತ್ತಿದ್ದಂತೆಯೇ ಹೌಲೆರ್ ಮಂಗಗಳ ಧ್ವನಿ ಪ್ರತಿಧ್ವನಿಸುತ್ತಿದ್ದರೆ; ಇತ್ತ ಆಫ್ರಿಕಾದ ಕಾಡುಗಳಲ್ಲಿ ಹಾಗೂ ಮಳೆಕಾಡುಗಳಲ್ಲಿ ಸ್ವಲ್ಪ ಒಣ ಪ್ರದೇಶ ಎಂದು ಗುರುತಿಸಬಹುದಾದ ಕಡೆ ಚಿಂಪಾಜಿಗಳ ಕೂಗು ಕಾಡಿನ ತುಂಬಾ ತುಂಬುತ್ತದೆ. ಇದು ಸ್ವಲ್ಪ ಬಿಡುವು ನೀಡುತ್ತಿದ್ದಂತೆಯೇ ಕೊಲಂಬಸ್ ಮಂಗಗಳು ತಮ್ಮ

ಪ್ರದರ್ಶನಕ್ಕೆ ಸಜ್ಜಾಗುತ್ತವೆ. ಇಷ್ಟೆಲ್ಲಾ ಸದ್ದು ಮೊಳಗುತ್ತಿದ್ದರೂ, ಇವೆಲ್ಲವನ್ನೂ ಒಬ್ಬ ನಿಂತು ನೋಡಲು ಬಯಸುವುದಾದರೆ, ಎಲ್ಲವೂ ಅಗೋಚರ. ಸದ್ದು ಬಂದ ದಿಕ್ಕಿನೆಡೆಗೆ ತಿರುಗಬಹುದೇ ಹೊರತು, ಸದ್ದು ಮಾಡುತ್ತಿರುವವರು ಯಾರು ಎಂದು ಹುಡುಕುವುದು ನಮ್ಮ ನಿರೀಕ್ಷೆಗೆ ನಿಲುಕದ್ದು. ದಟ್ಟ ಎಲೆಗಳ ಮರಗಳ ಹಿಂದೆ ಅವಿತು ಕಣ್ಣಾಮುಚ್ಚಾಲೆಯೂ ಆಡುತ್ತಿರಬಹುದು, ಮಾರುವೇಷಧಾರಿಗಳಾಗಿ ಕೂತಲ್ಲೇ ಕೂತೂ ಇರಬಹುದು. ಒಂದೇ ಪದದಲ್ಲಿ ಇದನ್ನು ಹೇಳುವುದಾದರೆ ನಮ್ಮ ಮಲೆನಾಡಿನಲ್ಲಿ ಬಳಕೆಯಲ್ಲಿರುವ **`ಮಂಗಮಾಯಾ'** ಎನ್ನುವುದು ಇದಕ್ಕೆ ಹೆಚ್ಚು ಸೂಕ್ತ. ಇನ್ನೂ ಒಂದಷ್ಟು ಜೀವಿಗಳು ಕ್ರಿಯಾಶೀಲವಾಗಿದ್ದರೂ ನಮಗೆ ಕೇಳುವ ಆವರ್ತನದ ಮಿತಿಯಿಂದಾಗಿ ಪಕ್ಕದಲ್ಲೇ ಇದ್ದರೂ ಗುರುತಿಸದೇ ಹೋಗಬಹುದು. ಆಗಾಗ ಬೆಳಕಿನ ಕಿಂಡಿಯಂತೆ ಕಣ್ಣು ಕುಕ್ಕುವ ಆಕರ್ಷಣೆ ಹೊಂದಿರುವ ಮೊರ್ಫ್ ಚಿಟ್ಟೆ ಅಥವಾ ತಲೆಯ ಮೇಲೆ ಚಂಗನೆ ಹಾರುವ ಮಂಗಟ್ಟೆಯಂತಹ ಒಂದಷ್ಟು ಪಕ್ಷಿಗಳು ಬಿಟ್ಟರೆ, ಉಳಿದೆಲ್ಲವೂ ಬೇಕೆಂದೇ ಸೃಷ್ಟಿಯಾದ ನಿಗೂಢ ಲೋಕ.

ಒಟ್ಟಿನಲ್ಲಿ ಇದೆಲ್ಲದಕ್ಕೂ ತಯಾರಾಗದ ಯಾರೇ ಈ ಮಳೆಕಾಡೊಳಗೆ ಕಾಲಿಟ್ಟರೂ ಜೀವನ ದುಸ್ತರ ಎಂದೆನಿಸಬಹುದು. ಪ್ರಕೃತಿಯು ಸೃಷ್ಟಿಯಲ್ಲಿ ಎಲ್ಲಾ ಗಮನವನ್ನು ತನ್ನತ್ತ ಬರಸೆಳೆದು, ಅತಿ ಹೆಚ್ಚು ಪ್ರಾಧಾನ್ಯತೆಯಿಂದಲೇ ನಡೆದ ರಚನೆ ಇದು ಎಂದು ಅನಿಸುವಂತೆ ಮಾಡಿ ಸೃಷ್ಟಿಯ ಸಂಕೀರ್ಣತೆಯನ್ನು ಈ ಮಳೆಕಾಡುಗಳು ಅಚ್ಚರಿಯ ಆಗರವಾಗಿಯೇ ಉಳಿಸಿವೆ.




**ಮುಂದುವರೆಯುತ್ತದೆ...**

ಲೇಖನ: ಸ್ಮಿತಾ ರಾವ್
ಶಿವಮೊಗ್ಗ ಜಿಲ್ಲೆ




# ಅನಿರೀಕ್ಷಿತವಾಗಿ ಸಿಕ್ಕ ಯುಲೋಫಿಯ ಹುಲ್ಲು ಆರ್ಕಿಡ್

ಇತ್ತೀಚೆಗೆ ನಾವು ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಕಾಡಂಚಿನಲ್ಲಿರುವ ಜೇಡೀ ಬೆಟ್ಟಕ್ಕೆ ವನವಿಹಾರಕ್ಕೆ ಹೋಗಿದ್ದೆವು. ಅಲ್ಲಿ ಸುತ್ತಾಡುವಾಗ ಒಂದು ಬಹು ಅಪರೂಪದ ಸಸ್ಯ ನಮಗೆ ಕಾಣಸಿಕ್ಕಿತು.

ನಾವು ನಡೆದು ಸಾಗುತ್ತಿದ್ದ ದಾರಿಯ ಪಕ್ಕದ ಇತರ ಗಿಡಗಳ ನಡುವೆ ಸುಂದರ ಹೂಗಳನ್ನು ಬಿಟ್ಟಿದ್ದ, ಎರಡುವರೆ ಅಡಿ ಎತ್ತರದ ಸಣ್ಣ ಸಸ್ಯ ನಮ್ಮ ಗಮನ ಸೆಳೆಯಿತು. ಈ ಗಿಡದ ರೂಪ ಲಕ್ಷಣಗಳನ್ನು ಗಮನಿಸಿದಾಗ ಇದು ಒಂದು ನೆಲ ಆರ್ಕಿಡ್ ಎಂದು ಗುರುತಿಸಿದೆವು. ಆದರೆ ಸುಂದರ ಹೂಗಳಿಂದ ಕಂಗೊಳಿಸುತ್ತಿದ್ದ ಈ ರೀತಿಯ ಆರ್ಕಿಡ್ ಅನ್ನು ಬನ್ನೇರುಘಟ್ಟದ ಕಾಡಿನಲ್ಲಿ ಎಂದೂ ಕಂಡೇ ಇರಲಿಲ್ಲ, ಇದೇ ಮೊದಲು.

ಮನೆಗೆ ಬಂದಾದ ಮೇಲೆ, ಈ ಹೊಸ ಆರ್ಕಿಡ್ ಹೂ ಯಾವುದಿರಬಹುದು ಎಂದು ತಿಳಿಯಲು ಆರ್ಕಿಡ್ ವ್ವಾಟ್ಸ್ ಆಪ್ ಗುಂಪಿಗೆ ಇದನ್ನು ಗುರುತಿಸಿ ಎಂದು ಹಂಚಿಕೊಂಡೆವು. ತಕ್ಷಣವೇ ನಮ್ಮ ಆರ್ಕಿಡ್ ತಜ್ಞರಾದ ಜಡೇಗೌಡ ಮಾದೇಗೌಡ ಸರ್ ರವರು ಇದನ್ನು Eulophia Graminea ಎಂದು ಗುರುತಿಸಿದರು. ಮೊದಲು ಇವರು ಈ ಆರ್ಕಿಡ್ ಅನ್ನು ಬಿಳಿಗಿರಿರಂಗಸ್ವಾಮಿ ಬೆಟ್ಟದ ಕಾಡುಗಳಲ್ಲಿ ಮಾತ್ರ ನೋಡಿದ್ದರಂತೆ. ಬನ್ನೇರುಘಟ್ಟ ಅರಣ್ಯದಲ್ಲೂ ಈ ಆರ್ಕಿಡ್ ಕಾಣಸಿಕ್ಕಿರುವುದಕ್ಕೆ ಸಂತಸಪಟ್ಟರು.

Eulophia Graminea ಏಷ್ಯಾ ಖಂಡದಲ್ಲಿ ಭೂಮಿಯ ಮೇಲೆ ಬೆಳೆಯುವ ಆರ್ಕಿಡ್ ಸಸ್ಯ. ಯುಲೋಪಿಯಾ ಸಸ್ಯ ಕುಲಕ್ಕೆ ಸೇರಿದ ಈ ಸಸ್ಯದ ಹೆಸರು ಗ್ರೀಕ್ ಭಾಷೆಯಲ್ಲಿನ ಯೂಲೋಪಿಸ್ ಎಂಬ ಪದದಿಂದ ಬಂದಿದೆ. 'ಯುಲೋಪಿಸ್' ಇದರ ಅರ್ಥ ಎದೆಯಾಕಾರದ ತುಟಿಯಂತಹ ಹೂವಿನ ದಳವಿರುವ ಸಸ್ಯ ಎಂದು!.






Eulophia Graminea ಒಂದು ನೆಲದ ಮೇಲೆ ಬೆಳೆಯುವ ಆರ್ಕಿಡ್ ಸಸ್ಯ. ಇದರ ಎಲೆಗಳ ರಚನೆಯು ನೀಳ ಈಟಿಯ ಆಕಾರವಿದ್ದು, ಹುಲ್ಲಿನ ಎಲೆಗಳ ರೀತಿ ಇದೆ. ತಿಳಿ ಹಸಿರು ಹಳದಿ ಮಿಶ್ರಿತ ಹೂಗಳು ಬೂದು ಬಣ್ಣವನ್ನು ಹೊಂದಿವೆ. ಎದೆಯಾಕಾರದ ತುಟಿಯಂತಹ ದಳಗಳು ಬಿಳಿ ಮತ್ತು ನೇರಳೆ ಬಣ್ಣದಿಂದ ಕೂಡಿದ್ದು, ಮಧ್ಯದಲ್ಲಿ ಕೆಂಪಾಗಿವೆ. ದಳದ ಮೇಲೆ ಬಲೆಯಾಕಾರದ ಗುರುತುಗಳಿವೆ.

ಹೂವಿರುವ ಕೊಂಬೆ ನೀಳವಾಗಿದ್ದು 60-80 ಸೆಂ.ಮೀ. ಉದ್ದವಿರುತ್ತದೆ. ಇದರ ಮಧ್ಯೆ ಗೆಣ್ಣುಗಳಲ್ಲಿ ಅಲ್ಲಲ್ಲಿ 10-20 ಹೂಗಳನ್ನು ಬಿಟ್ಟಿರುತ್ತದೆ. ಪ್ರತಿ ಕೊಂಬೆಯಲ್ಲಿರುವ ಹೂಗಳು ಒಂದಾದ ಮೇಲೆ ಒಂದರಂತೆ ಸುಮಾರು ಒಂದು ತಿಂಗಳ ಕಾಲ ಅರಳುತ್ತಿರುತ್ತವೆ. ಪ್ರತಿ ಹೂ 10-12 ದಿನಗಳವರೆಗೂ ಅರಳಿರುತ್ತದೆ. ಸಂಪೂರ್ಣವಾಗಿ ಬೆಳೆದ ಗಿಡದ ಕೊಂಬೆಯ ಮೇಲೆ ಅಲ್ಲಲ್ಲಿ ಕಿರಿದಾದ ಎಲೆಗಳನ್ನು ಹೊಂದಿರುವ ಹುಸಿ ಬುಡ್ಡೆಗಳು ಇರುತ್ತವೆ. ದುಂಡಗಿನ ಈ ಹುಸಿ ಬುಡ್ಡೆಯ ಬುಡದಲ್ಲಿ ಸಧೃಡ ಬಿಳಿ ಬೇರುಗಳು ಹೊರಹೊಮ್ಮಿರುತ್ತವೆ. ಅಲ್ಲದೆ ಈ ಆರ್ಕಿಡ್ ಸೆಪ್ಟೆಂಬರ್ ಮತ್ತು ನವೆಂಬರ್ ತಿಂಗಳಲ್ಲೂ ಹೂ ಬಿಡುತ್ತದೆ.

ತೇವವುಳ್ಳ ಎಲೆ ಉದುರುವ ಕಾಡುಗಳು ಮತ್ತು ಹುಲ್ಲುಗಾವಲಿನ ನೆರಳಿರುವ ತಾಣಗಳೇ ಇದರ ನೈಸರ್ಗಿಕ ಆವಾಸ. ಈ ಆರ್ಕಿಡ್ ಶ್ರೀಲಂಕಾ, ಬರ್ಮಾ, ನೇಪಾಳ, ಥೈಲ್ಯಾಂಡ್, ಇಂಡೋನೇಷ್ಯಾದಲ್ಲಿ ಸಮುದ್ರ ಮಟ್ಟದಿಂದ 1200 ಮೀಟರ್ ಎತ್ತರದ ಪ್ರದೇಶಗಳಲ್ಲಿ ಕಂಡು ಬಂದರೆ ಭಾರತದ ಪೂರ್ವ ಹಿಮಾಲಯದಲ್ಲಿ ಸಮುದ್ರ ಮಟ್ಟದಿಂದ 900-1200 ಮೀಟರ್ ಎತ್ತರದ ಪ್ರದೇಶಗಳಲ್ಲೂ ಕಾಣಸಿಗುತ್ತವೆ.

ಈ ಆರ್ಕಿಡ್ ಭಾರತದ ಕೇರಳ, ಕರ್ನಾಟಕ, ಪಂಜಾಬ್, ಅರುಣಾಚಲ ಪ್ರದೇಶ, ಅಸ್ಸಾಂ, ಸಿಕ್ಕಿಂ, ಹಾಗೂ ಅಂಡಮಾನ್-ನಿಕೋಬಾರ್ ದ್ವೀಪ ಪ್ರದೇಶದ ಕಾಡುಗಳಿಂದ ದಾಖಲಾಗಿದೆ.

ಕೇರಳದ ಮಲ್ಲಪುರಂ, ಪಲಕಾಡ್ ಮತ್ತು ತ್ರಿಶೂರ್ ಜಿಲ್ಲೆಗಳಲ್ಲೂ ಕಂಡು




Figure 332. 1–14. **Eulophia graminea** Lindley, 美冠兰 mei guan lan. —1. Plant with flowers and fruits. —2. Leafy plant after anthesis. —3. Portion of a leaf showing cross section. —4, 5. Front and lateral views of flower. —6. Dorsal sepal. —7. Petal. —8. Lateral sepal. —9. Lip. —10. Ovary, column, and lip. —11. Adaxial view of column. —12. Lateral view of column. —13. Adaxial and abaxial views of anther. —14. Adaxial and abaxial views of pollinia. (FOC 255; FRPS 18: 182. 1999. —苏鸿杰 Su Horng-Jye; reproduced from 苏鸿杰 Su Horng-Jye in 黄增泉 Huang Tseng-Chieng (ed.), Flora of Taiwan 2nd ed. 5: pl. 372. 2000).

ಬಂದಿದೆ. ಕರ್ನಾಟಕದ ಬಿಳಿಗಿರಿರಂಗಸ್ವಾಮಿ ಬೆಟ್ಟದ ಕಾಡು ಮತ್ತು ಈಗ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದ ಕಾಡುಗಳಲ್ಲಿ ಕಾಣಸಿಕ್ಕಿದೆ.

ಶ್ರೀಲಂಕಾದಲ್ಲಿ ಅಳಿವಿನಂಚಿನಲ್ಲಿರುವ ಈ ಆರ್ಕಿಡ್, ಸಿಂಗಾಪುರದ ಸಮುದ್ರದ ತಟಗಳಲ್ಲಿ, ಹುಲ್ಲುಗಾವಲಿನ ಬಯಲು ಪ್ರದೇಶಗಳಲ್ಲಿ ಅಷ್ಟೇ ಏಕೆ ರಸ್ತೆಬದಿಯಲ್ಲಿ ಮತ್ತು ಅಲ್ಲಿನ ಉದ್ಯಾನಗಳಲ್ಲಿ ಕಾಣಸಿಗುತ್ತದೆ.

ತೈವಾನಿನ ತಗ್ಗುಪ್ರದೇಶದ ಪೊದೆಗಳಲ್ಲಿ, ಸಮುದ್ರ ತಟದ ಹುಲ್ಲುಗಾವಲಿನಲ್ಲಿ ನೈಸರ್ಗಿಕವಾಗಿ ಬೆಳೆದಿರುವುದು ಕಂಡುಬಂದಿದೆ. ಅಚ್ಚರಿಯೆಂದರೆ, ಈ ಆರ್ಕಿಡ್ ಆಸ್ಟ್ರೇಲಿಯಾ ಮತ್ತು ಯುಎಸ್ಎ ದೇಶಗಳಲ್ಲಿನ ಮರದ ಪುಡಿಯ ಹಸಿಗೊಬ್ಬರದ ತಿಪ್ಪೆಗುಂಡಿಗಳಲ್ಲಿ ನಾಲ್ಕು ಕಡೆ ನೈಸರ್ಗಿಕವಾಗಿ ಬೆಳೆದಿರುವುದು ಕಂಡು ಬಂದಿದೆ. ಇದು ಆಸ್ಟ್ರೇಲಿಯಾ ಮತ್ತು ಯುಎಸ್ಎ ವರೆಗೂ ಹೇಗೆ ತಲುಪಿತು ಎಂಬುದೇ ಪ್ರಶ್ನೆ?. ಬಹುಶಃ ಏಷ್ಯಾದ ದೇಶಗಳಿಂದ ಸಾಗಿಸಲ್ಪಡುವ ಮರದ ಪುಡಿಯ ಹಸಿಗೊಬ್ಬರದ ಜೊತೆ ಇದರ ಬೀಜಗಳೂ ಕೂಡ ರಫ್ತಾಗಿರಬಹುದು!. ಮತ್ತೊಂದು ಅಚ್ಚರಿಯ ವಿಷಯವೆಂದರೆ ಕರ್ನಾಟಕದ ಕಾಡುಗಳಲ್ಲಿ ಈ ಆರ್ಕಿಡ್ ಕಾಣಸಿಗುವುದೇ ಅಪರೂಪ. ನಮಗೆ ಈಗ ಕಂಡಿದೆ.







**ಕನ್ನಡಕ್ಕೆ ಅನುವಾದ: ಶಂಕರಪ್ಪ ಕೆ. ಪಿ.**
**ಮೂಲ ಲೇಖನ: ವಿಪಿನ್ ಬಾಳಿಗಾ**
**ಡಬ್ಲ್ಯೂ.ಸಿ.ಜಿ. ಬೆಂಗಳೂರು**




ವಿವಿ ಅಂಕಣ

# ಪರಯಾರ್ರಯು ಹುಡುಕಿದ ಪತಂಗ

ಕತ್ತಲಲ್ಲಿ ಬರುವಾಗ ಹೆದರಿಕೆ ಆಗಬಾರದೆಂದು ಅಲ್ಲಲ್ಲಿ ನಿಲ್ಲುತ್ತಾ, ಟಾರ್ಚ್ ಅನ್ನು ಅತ್ತ-ಇತ್ತ ಆಡಿಸಿ ನೋಡುತ್ತಾ, ಕಾಡಿನಂತಿರುವ ಆಶ್ರಮದ ತೋಟದ ಒಳಗಿರುವ ನನ್ನ ರೂಮಿಗೆ ಬರುತ್ತಿದ್ದೆ. ಹಾಗೆ ಬರುವಾಗ ಏಕೋ ತಿಳಿಯದು ಹಾಗೆ ಟಾರ್ಚ್ ಅನ್ನು ಮೇಲಕ್ಕೆ ಹಾಯಿಸಿದೆ ಸ್ವಲ್ಪ ದೂರದ ಹಸಿರು ಎಲೆಗಳಿರುವ ಮರದಲ್ಲಿ ಸುಮಾರಾಗಿರುವ ಒಂದು ಬಿಳಿ ಪೇಪರ್ ಹೊಳೆದಂತಾಯಿತು. ಮರದ ಮೇಲೆ ಅಷ್ಟು ಎತ್ತರಕ್ಕೆ ಪೇಪರ್ ಇರಲಿಕ್ಕೆ ಹೇಗೆ ಸಾಧ್ಯ? ಹೆಚ್ಚೆಚ್ಚು ಇಂಗ್ಲೀಷ್ ಸಿನೆಮಾ ನೋಡುತ್ತಿದ್ದರಿಂದ ನನಗೆ ಅನಿಸಿದ್ದು ಓಹ್ ಇದು ಯಾವುದೋ ಇಂಗ್ಲೀಷ್ ದೇವತೆ ಇರಬೇಕು. ಅರೇ... ಮೊದಲೇ ಅರ್ಧ ಧೈರ್ಯದಲ್ಲಿ ತುಂಬಾ ಸಾಹಸ ಮಾಡಿ ಬರುತ್ತಿದ್ದ ನನಗೆ ಇದ್ಯಾವುದೋ ತಗುಲಿಕೊಂಡಿತಲ್ಲ... ಎಂದನಿಸಿದರೂ ಧೈರ್ಯ ಮಾಡಿ ಒಂದು ದೀರ್ಘ ಉಸಿರು ಒಳಗೆಳೆದು, ಹಿಂದಿಗಿಂತಲೂ ಎಚ್ಚರವಾಗಿ ಅತ್ತಿತ್ತ ಹೆಚ್ಚೆಚ್ಚು ನೋಡುತ್ತಾ ಮರದ ಸಮೀಪಕ್ಕೆ ಹೆಜ್ಜೆ ಹಾಕಿದೆ. ನನ್ನ ಆಶ್ಚರ್ಯಕ್ಕೆ ಅಲ್ಲಿದ್ದುದು ನಾನೆಂದೂ ಕಂಡಿರದ ಭಾರತದಲ್ಲೇ ವಿರಳವಾಗಿ ಸಿಗುವಂತಹ ಒಂದು ಪ್ರಭೇದದ ಪತಂಗ!

ಆಕಾರದಲ್ಲಿ ಪತಂಗಗಳು ಚಿಟ್ಟೆಗಳ ಹೋಲಿಕೆಯಿದ್ದರೂ ಅವೇ ಬೇರೆ - ಇವೇ ಬೇರೆ. ಚಿಟ್ಟೆಗಳು ಹೆಚ್ಚಾಗಿ ಬೆಳಗಿನ ಸಮಯದಲ್ಲಿ ಕಾರ್ಯಗತವಾಗಿದ್ದರೆ, ಪತಂಗಗಳು ರಾತ್ರಿ ವೇಳೆ ಹೆಚ್ಚು ಕ್ರಿಯಾಶೀಲವಾಗಿರುತ್ತವೆ. ಅಲ್ಲದೇ ಇನ್ನೂ ಕೆಲವು ವ್ಯತ್ಯಾಸಗಳಿದ್ದೂ ಅವನ್ನು ಮುಂದೆ ಎಂದಾದರು ಈ ಪತಂಗದ ಕತೆ ಬರೆಯುವಾಗ ಇಲ್ಲಿ ಹೇಳದ ಆ ವಿಶೇಷ ಪತಂಗದ ಹೆಸರಿನ ಜೊತೆಗೆ ಹೇಳುತ್ತೇನೆ. ಒಟ್ಟಿನಲ್ಲಿ ಪತಂಗಗಳು ಚಿಟ್ಟೆಗಳಿಗಿಂತ ಭಿನ್ನವಾಗಿದ್ದು

ರಾತ್ರಿಯಲ್ಲಿ ಹಾರಾಡುವುದಂತೂ ನಿಜ. ಆದರೆ ಪತಂಗಗಳೂ ಸಹ ಚಿಟ್ಟೆಗಳ ರೀತಿಯೇ ರಾತ್ರಿ ಅರಳುವ ಹೂಗಳನ್ನು ಅರಸಿ ಹೋಗಿ ಮಕರಂದ ಹೀರಿ ಪರಾಗಸ್ಪರ್ಶದಂತಹ ಮಹತ್ಕಾರ್ಯ ಮಾಡುತ್ತವೆ. ಪತಂಗಗಳ ಮಕರಂದ ಹೀರುವ ನಳಿಕೆಗಳಿಗೆ ಅನುಗುಣವಾಗಿಯೇ ಕೆಲವು ಗಿಡಗಳು ಆ ಆಕಾರದಲ್ಲಿಯೇ ಹೂ ಬಿಡುತ್ತವೆ ಎಂದರೆ ನಂಬಲು ಕಷ್ಟವೆನಿಸಿದರೂ ಸತ್ಯವೇ. ಅದೋ ನಿಮ್ಮ ಪ್ರಶ್ನೆ ನನಗೆ ಕೇಳಿಸಿತು. ರಾತ್ರಿಯಲ್ಲಿ ಅಷ್ಟು ಕತ್ತಲೆ ಇದ್ದು ಹೀಗೆ ವಿಶೇಷ ಹೂಗಳನ್ನು ಪತಂಗಗಳು ಹೇಗೆ ಹುಡುಕಿಕೊಂಡು ಹೋಗುತ್ತವೆ ಎಂದಲ್ಲವೇ? ಸ್ವಲ್ಪ ವೈಜ್ಞಾನಿಕವಾಗಿ ಯೋಚಿಸಿದರೆ ನಿಮಗೇ ಉತ್ತರ ಸಿಗುತ್ತದೆ. ಉತ್ತರ ಸರಳ, ಪತಂಗಗಳು ಹೆಚ್ಚಾಗಿ ಹೂವಿನ ಸುಗಂಧವನ್ನು ಗುರುತಾಗಿಸಿಕೊಂಡು ಅದನ್ನೇ ಗೂಗಲ್ ಮ್ಯಾಪ್ ಆಗಿಸಿಕೊಂಡು ಹೂವನ್ನರಸಿ ಹೋಗುತ್ತವೆ. ಹಾಗೆಂದು ಅವುಗಳಿಗೆ ಕಣ್ಣಿನ ಅವಶ್ಯಕತೆ ಇಲ್ಲವೆಂದಲ್ಲ. ವಾಸನೆಯ ಜೊತೆಗೆ ತಮ್ಮ ಸೂಕ್ಷ್ಮ ಕಣ್ಣುಗಳ ಸಹಾಯದಿಂದಲೂ ಆ ರಾತ್ರಿಯ ಮಂದ ಬೆಳಕಿನಲ್ಲಿ ಹೂಗಳನ್ನು ಹುಡುಕುತ್ತವೆ. ಓಹ್ ಹಾಗಾದರೆ ಮತ್ತೇನು ಎಲ್ಲ ಒಳಿತಾಯಿತಲ್ಲ. ಪತಂಗಗಳು ಆನಂದವಾಗಿ ಮಕರಂದ ಹೀರುತ್ತಾ, ಜಾಲಿಯಾಗಿ ಹಾಡುತ್ತಾ, ಖುಷಿಯಿಂದ ಇರಬೇಕಲ್ಲಾ... ಎಂದು ಮಾತ್ರ ಕೇಳಬೇಡಿ. ಅರೇ... ನಾವು ಮಾಡಿರುವ ಘನತ್ಕಾರ್ಯಗಳು ಒಂದೇ.. ಎರಡೇ..? ಅದರಲ್ಲೊಂದಾದ ವಾಯು ಮಾಲಿನ್ಯದಿಂದ ಪತಂಗಗಳಂತಹ ಎಷ್ಟೋ ಜೀವಿಗಳ ಜೀವನ ಕಂಗೆಟ್ಟಿದೆ. ತಮ್ಮ ಜೀವನಾಧಾರವಾದ ಹೂಗಳ ಮಕರಂದ ಹೀರಲು ಸಾಧ್ಯವಾಗದೇ ಸಾಯುವಂತಾಗಿದೆ. ಹೇಗೆ ಹೇಳಿ? ಈ ಮುಂಚೆಯೇ ಹೇಳಿದ ಹಾಗೆ ಪತಂಗಗಳು ತಮ್ಮ ವಾಸನಾಗ್ರಹಿಕೆ ಸಾಮರ್ಥ್ಯದಿಂದ ಹೂಗಳನ್ನರಸಿ ಹೋಗುತ್ತಿದ್ದವು. ಈಗ ಆ ಗಾಳಿಯಲ್ಲಿ ನಾವು ಸೇರಿಸಿರುವ ಮಾಲಿನ್ಯದಿಂದ ಹೂಗಳ ಆ ವಾಸನೆ ಬದಲಾಗುತ್ತಿದೆ. ಇದರಿಂದ ಪತಂಗಗಳಿಗೆ ಆ ವಾಸನೆ ಹೂವಿನದ್ದು ಎಂದು ಗ್ರಹಿಸಲಾರದೆ, ಆಹಾರವಿಲ್ಲದೆ, ಕೊನೆಗೆ ದಾರಿಯಿಲ್ಲದೆ ಸಾಯುವ ಸ್ಥಿತಿಗೂ ಬರುತ್ತದೆ. ಆದರೇ... ಇಲ್ಲೊಂದು ಪತಂಗ ಇದಕ್ಕೆ ಪರ್ಯಾಯವಾಗಿ ಮಾಲಿನ್ಯಯುಕ್ತ ಗಾಳಿಯಲ್ಲಿ ತೇಲಿ ಬರುವ ಬದಲಾದ ಹೂವಿನ ಸುಗಂಧವನ್ನೂ ಗ್ರಹಿಸುವಂತೆ ತನ್ನನ್ನು ತಾನು ಬದಲಿಸಿಕೊಂಡಿದೆ ಎನ್ನುತ್ತಿದೆ ಹೊಸ ಸಂಶೋಧನೆ. ಅದು ಹೇಗೆ?



ಕೆಲವು ಪರಾಗಸ್ಪರ್ಶಕಗಳು ಹೊಸ ಸುಗಂಧವನ್ನು ಗ್ರಹಿಸುವ ಸಾಮರ್ಥ್ಯ ಪಡೆದುಕೊಂಡಿದ್ದರೂ ಹೀಗೆ ಮಾಲಿನ್ಯದಿಂದ ಬದಲಾದ ಸುಗಂಧವನ್ನು ಗ್ರಹಿಸಬಲ್ಲ ಪರಾಗಸ್ಪರ್ಶಕಗಳ ಬಗ್ಗೆ ಮಾಡಿದ ಮೊದಲನೇ ಸಂಶೋಧನೆ ಇದೆ. ಹಾಗಾದರೆ ನೇರ ಸಂಶೋಧನೆಯ ಮೂಲಕ್ಕೆ ಇಳಿದುಬಿಡೋಣ. ಈ ಕತೆಯಲ್ಲಿ(ಸಂಶೋಧನೆಯಲ್ಲಿ) ಹೀರೋ

ಟೊಬ್ಯಾಕೋ ಹಾಕ್ ಮಾತ್ ಎಂದು ಕರೆಯಲ್ಪಡುವ ಪತಂಗ. ಹೀರೋಯಿನ್ ಒಂದು ಜಾಸ್ಮಿನ್ ಟೊಬ್ಯಾಕೋ ಎನ್ನುವ ಸುಗಂಧಮಯ ಹೂವು. ಪೊಲ್ಯೂಷನ್ ಎನ್ನುವುದು ಇವರ ಮಧ್ಯೆ ಬರುವ ವಿಲನ್. ಇಲ್ಲಿಯವರೆಗೆ ಇಲ್ಲದ ಈ ವಿಲನ್ ನ ಆಗಮನದಿಂದ ಹೀರೋ ಪತಂಗವು ಜಾಸ್ಮಿನ್ ಹೂವನ್ನು ಸೇರಲು ಆಗುತ್ತಿಲ್ಲ. ಆದರೆ ಸ್ವಲ್ಪ ಸಮಯ ಮತ್ತು ಚಾಕಚಕ್ಯತೆಯಿಂದ ಪತಂಗವು ಪೊಲ್ಯೂಷನ್ ಎಂಬ ವಿಲನ್ ಅನ್ನು ಹೊಡೆದಟ್ಟಿ ಜಾಸ್ಮಿನ್ ಅನ್ನು ಸೇರಬಲ್ಲ ಪ್ರಬಲ ಪತಂಗವಾಗಿ ಹೊರಹೊಮ್ಮಿದೆ. ಇಷ್ಟೇ ಈ ಸಂಶೋಧನೆಯ ಕಥಾವಸ್ತು. ಆದರೆ ಸಂಶೋಧನೆಯನ್ನು ಸಂಶೋಧನೆಯ ಹಾಗೆ ಹೇಳಿದರೆ ಅದರ ನಿಜವಾದ ಅರ್ಥ ತಿಳಿಯುವುದಾದ್ದರಿಂದ, ಸಂಶೋಧನೆಯಲ್ಲಿ ನಿಖರವಾಗಿ ಏನಾಯಿತು ಎಂದು ನೋಡಿಬಿಡೋಣ.

ವಾಯುಮಾಲಿನ್ಯದ ಮುಖ್ಯ ಕಾರಣಗಳಲ್ಲಿ ಒಂದಾದ ಓಝೋನ್ ಅನ್ನು ಗಮನಿಸಿದರೆ; ಈ ಓಝೋನ್ ಮಲ್ಲಿಗೆ ಹೂ ಹೊರಸೂಸುತ್ತಿದ್ದ ಸುಗಂಧದ ಜೊತೆ ರಾಸಾಯನಿಕವಾಗಿ ಬೆರೆತು ಸುಗಂಧ ಕಣಗಳ ರಾಸಾಯನಿಕ ರಚನೆಯನ್ನು ಬದಲಿಸುತ್ತಿತ್ತು. ಇದರಿಂದಾಗಿ ಮಲ್ಲಿಗೆ ಹೂವಿನಿಂದ ಬರುತ್ತಿದ್ದ ನಿಜವಾದ ಸುಗಂಧ ಹಾಕ್ ಮಾತ್ ಗೆ ಅದೇ ರೀತಿಯಲ್ಲಿ ತಲುಪುತ್ತಲೇ ಇರಲಿಲ್ಲ. ಇದರಿಂದಾಗಿ ಪತಂಗಗಳು ತಮ್ಮ ಆಹಾರವಾದ ಮಕರಂದ ಹೀರಲು ಹೂವನ್ನು ಸೇರಲು ಮುಖ್ಯ ದಾರಿದೀಪ ಆರಿಹೋದ ಹಾಗಾಯಿತು. ಆದರೆ ಸ್ವಲ್ಪ ಸಮಯದಲ್ಲೇ ಪತಂಗಗಳು ಆ ಬದಲಾದ ಸುಗಂಧವು ಮಲ್ಲಿಗೆ ಹೂವಿನದೇ ಎಂದು ಗುರುತಿಸುವುದನ್ನು ಕಲಿತುಕೊಂಡಿವೆ ಎನ್ನುತ್ತಿದ್ದಾರೆ ಸಂಶೋಧಕರು. ಇದನ್ನು ತಿಳಿಯಲು ಅವರು ನಡೆಸಿದ ಪ್ರಯೋಗ, ಓಝೋನ್ ಜೊತೆಗೆ ಸೇರಿ ಬದಲಿದ ಸುಗಂಧದ ಗಾಳಿಯನ್ನು ಒಂದು ಸಣ್ಣ ನಳಿಕೆಯಲ್ಲಿ ಹೋಗಲು ಬಿಟ್ಟರು. ಆ ನಳಿಕೆ ಇನ್ನೊಂದು ತುದಿಯಲ್ಲಿ ಫ್ರಿಡ್ಜ್ ಗಾತ್ರದ ಒಂದು ಗಾಜಿನ ಡಬ್ಬ ಇರಿಸಿ ಅದರೊಳಗೆ ಈ ಹಾಕ್ ಮಾತ್ ಅನ್ನು ಬಿಡಲಾಗಿತ್ತು. ಈ ಬದಲಿದ ಸುಗಂಧ ಗಾಳಿಯು ನಳಿಕೆಯಲ್ಲಿ ಬಂದಾಗ ಸ್ವಲ್ಪ



ತಡಬಡಿಸಿ ಪತಂಗ ಕೊನೆಗೆ ತನ್ನ ಮಕರಂದ ಹೀರುವ ನಳಿಕೆಯನ್ನು ಮೇಲೆತ್ತಿ ಪ್ಲಾಸ್ಟಿಕ್ ನಳಿಕೆಯ ಬಳಿ ಬರುತ್ತದೆಂದು ಸಂಶೋಧಕರು ಊಹಿಸಿದ್ದರು. ಆದರೆ ಪತಂಗವು ಯಾವುದೇ ಬದಲಾವಣೆಯನ್ನು ತೋರಲಿಲ್ಲ.

ಮುಂದಿನ ಹಂತದಲ್ಲಿ, ಪತಂಗಗಳು ಕೇವಲ ವಾಸನೆ ಗ್ರಹಿಸಿ ಅಲ್ಲದೆ ಹೂವನ್ನು ಕಣ್ಣಿನಿಂದ ನೋಡಿಯೂ ಸಹ ಗುರುತಿಸುತ್ತಿದ್ದವು ಎಂಬ ಸತ್ಯ ನೆನಪಾದ ಮೇಲೆ; ತಾವೇ ತಯಾರಿಸಿದ ಗಾಢ ಬಣ್ಣದ ಪ್ಲಾಸ್ಟಿಕ್ ಮಲ್ಲಿಗೆ ಹೂವನ್ನು ಆ ಸುಗಂಧ ಕಳಿಸಲಾಗುತ್ತಿದ್ದ ಪ್ಲಾಸ್ಟಿಕ್ ನಳಿಕೆಗೆ ಹೊಂದಿಸಿ, ಆ ಹೂವಿನ ಮೇಲೆ ಮಕರಂದವನ್ನು ಹೋಲುವಂತಹ ಸಕ್ಕರೆ ಪಾಕವನ್ನೂ ಇರಿಸಿ ನಂತರ ಬದಲಿಸಿದ ಸುಗಂಧವನ್ನು ನಳಿಕೆಯಿಂದ ಬಿಟ್ಟರು. ಆಗ ಪತಂಗವು ಹೂವಿನ ಬಳಿ ಬಂದು ಮಕರಂದ ಹೀರುತ್ತಿತ್ತು. ಹೀಗೆ ಕೆಲವು ನಿಮಿಷಗಳು ಅಭ್ಯಾಸ ಮಾಡಿಸಿದ ನಂತರ ಅಂದರೆ ಸುಮಾರು 15 ನಿಮಿಷಗಳ ಅಂತರದಲ್ಲಿ ಮತ್ತೆ ಪತಂಗವನ್ನು ಗಾಜಿನ ಡಬ್ಬಿಯಲ್ಲಿ ಬಿಟ್ಟರು. ಈ ಬಾರಿ ಯಾವುದೇ ಹೂ ಅಥವಾ ಮಕರಂದವ ಹೋಲುವ ಸಕ್ಕರೆ ಪಾಕ ಇರಲಿಲ್ಲ. ನಳಿಕೆಯಲ್ಲಿ ಕೇವಲ ಬದಲಿಸಿದ ಮಲ್ಲಿಗೆ ಹೂ ಸುಗಂಧವನ್ನು ಕಳುಹಿಸಲಾಯಿತು. ಏನಾಗಿರಬಹುದು ಊಹಿಸಿ? ಹೌದು ನೀವು ಸರಿಯಾಗಿ ಯೋಚಿಸಿದ್ದೀರಿ. ಯಾವುದೇ ಹೂ ಅಥವಾ ಸಕ್ಕರೆ ಪಾಕ ಇಲ್ಲದಿದ್ದರೂ ಪತಂಗವು ತನ್ನ ಮಕರಂದ ಹೀರುವ ನಳಿಕೆಯನ್ನು ಮೇಲೆತ್ತಿ ನಳಿಕೆಯ ಬಳಿ ಹಾರುತ್ತಿತ್ತು. ಇದರಿಂದ ಸ್ಪಷ್ಟವಾಗಿ ತಿಳಿಯುತ್ತದೆ, ಈ ಪತಂಗಗಳು ಸ್ವಲ್ಪ ಸಮಯದಲ್ಲೇ ಹೂವಿನಿಂದ ಹೊರಬಂದ ಬದಲಾದ ಸುಗಂಧವನ್ನೂ ಗ್ರಹಿಸಿ, ಇದು ಜಾಸ್ಮಿನ್ ಟೊಬ್ಯಾಕೋ ಮಲ್ಲಿಗೆ ಹೂವಿನದೇ ಎಂದು ಗುರುತಿಸುವಲ್ಲಿ ಯಶಸ್ವಿಯಾಯಿತು.

ಅದೇನೆ ಆದರೂ ನಾವು ಮಾಡುತ್ತಿರುವ ಈ ಮಾಲಿನ್ಯಗಳ ಪರಿಣಾಮ ಕೆಟ್ಟದ್ದೇನು ಅಲ್ಲ! ಈ ಸಂಶೋಧನೆ ಹೇಳುವ ಹಾಗೆ ಕೀಟಗಳೇ ಈ ಮಾಲಿನ್ಯಕ್ಕೆಲ್ಲಾ ಒಗ್ಗಿಕೊಳ್ಳುತ್ತವೆ ಎಂಬ ಆಲೋಚನೆ ಮಾತ್ರ ಒಳ್ಳೆಯದಲ್ಲ. ಆದರೆ ನಾವು ಇಲ್ಲಿ ಗಮನಿಸಬೇಕಾದದ್ದು ಒಂದು ಸೂಕ್ಷ್ಮ ವಿಷಯವಿದೆ. ಏನು ಹೇಳಿ ನೋಡೋಣ?... ಈ ಬದಲಿದ ಸುಗಂಧ ಗ್ರಹಿಸಬಲ್ಲ ಪತಂಗದ ಸಂಶೋಧನೆ ನಡೆದದ್ದು ಒಂದು ಚಿಕ್ಕ - ಚೊಕ್ಕ ಪ್ರಯೋಗಾಲಯದಲ್ಲಿ. ಹೊರಗಿನ ವಿಶಾಲವಾದ ಪರಿಸರದಲ್ಲಿ ಪತಂಗಗಳು ಹೇಗೆ ಈ ಬದಲಿ ಸುಗಂಧವನ್ನು ಗ್ರಹಿಸಬಲ್ಲವು ಎಂಬುದು ಇನ್ನೂ ಅರಿಯದ ಮಾಹಿತಿಯಾಗಿಯೇ ಉಳಿಯುತ್ತದೆ. ನಮ್ಮ ತಪ್ಪನ್ನು ಇಷ್ಟು ದಿನ ಸಮರ್ಥಿಸಿಕೊಂಡು ಬಂದದ್ದು ಸಾಕು. ಈಗ ಕನಿಷ್ಠ ಎಂದರೆ ನಮ್ಮ ತಪ್ಪುಗಳ ಅರಿವಾದರೂ ಮೂಡಿಸಿಕೊಳ್ಳುತ್ತಾ ಹೋಗೋಣ. ಆಗಲಾದರೂ ಪರಿಹಾರದ ದಾರಿಗಳು ಗೋಚರವಾದೀತು....

**ಮೂಲ ಲೇಖನ:** ScienceNewsforStudents



**ಲೇಖನ: ಜೈಕುಮಾರ್ ಆರ್.**
**ಡಬ್ಲ್ಯೂ.ಸಿ.ಜಿ. ಬೆಂಗಳೂರು**

# ನಿಸರ್ಗ ಮಾತೆ

ಹಸಿರ ಉಟ್ಟ ಭೂಮಿತಾಯೇ
ಉಸಿರ ಕೊಟ್ಟು ಬದುಕಿಸುವ ಮಾಯೇ
ಏನಿಂಥ ಮಮಕಾರ
ನಮ್ಮ ಮೇಲೆ
ನಿನ್ನ ಮಡಿಲಲಿ ನಾ ಮಗುವಾದೆ

ಒಂದಿನಿತು ಸ್ವಾರ್ಥವಿಲ್ಲ
ಏನೊಂದು ವ್ಯರ್ಥವಿಲ್ಲ
ಏನಿಂಥ ಸಾಕಾರ
ನಿನ್ನ ಲೀಲೆ
ನೀ ನಮ್ಮ ಮೊಗದ ನಗುವಾದೆ

ನೋಡಿದಷ್ಟು ಸೊಗಸಿದೆ
ಅರಿತಷ್ಟು ಅರಿಯುವುದಿದೆ
ಏನಿಂಥ ಆಕಾರ
ನೀ ನಮ್ಮ ಪಾಠಶಾಲೆ
ನೀ ನನ್ನ ಕಲಿಕೆಯ ಜಗವಾದೆ

ಅಗಣಿತ ಸಂಪದ್ಭರಿತವು
ಅನುಕ್ಷಣವು ಅಕ್ಷಯವು
ಏನಿಂಥ ಸಹಕಾರ
ಮನುಕುಲದ ಮೇಲೆ
ನಿನ್ನ ಆಶೀರ್ವಾದವ ಕಂಡು ನಾ ಧನ್ಯನಾದೆ

- ಜನಾರ್ಧನ್ ಎಂ. ಎನ್.

# ಪ್ರಕೃತಿ ಬಿಂಬ



ಫ್ಲೆಮಿಂಗೋ © ಸೇಪುರಿ ಸಾಯಿ ಅಖಿಲ್ ತೇಜ

ಫ್ಲೆಮಿಂಗೋಗಳು ಸಾಮಾನ್ಯವಾಗಿ ಒಂದು ಕಾಲಿನ ಮೇಲೆ ನಿಲ್ಲುತ್ತವೆ, ಇನ್ನೊಂದು ಕಾಲನ್ನು ದೇಹದ ಕೆಳಗೆ ಸಿಕ್ಕಿಸಿಕೊಳ್ಳುತ್ತವೆ. ಈ ನಡವಳಿಕೆಯ ಕಾರಣವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲಾಗಿಲ್ಲ. ಒಂದು ಸಿದ್ಧಾಂತವೆಂದರೆ, ತಣ್ಣನೆಯ ನೀರಿನಲ್ಲಿ ನಿಲ್ಲುವುದರಿಂದ ದೇಹದ ಉಷ್ಣಾಂಶವನ್ನು ಕಾಪಾಡಿಕೊಳ್ಳಲು ಸಹಾಯವಾಗುತ್ತದೆ ಎನ್ನುವುದು, ಆದರೆ ಫ್ಲೆಮಿಂಗೋಗಳ ಈ ನಡವಳಿಕೆಗೆ ಸೂಕ್ತ ಕಾರಣವನ್ನು ಇನ್ನೂ ಹುಡುಕಲಾಗಿಲ್ಲ. ಆಹಾರವನ್ನಾಗಿ ಇವುಗಳು ನೀರಿನಲ್ಲಿ ಸಿಗುವ ಕೀಟಗಳ ಲಾರ್ವಗಳು, ಮೀನುಗಳು, ಸೀಗಡಿಗಳು ಮತ್ತು ಪಾಚಿಯನ್ನು ಸೇವಿಸುತ್ತವೆ. ಇವುಗಳಿಗೆ ಆಹಾರ ಪದಾರ್ಥಗಳನ್ನು ವಿಂಗಡಿಸಲು ಲ್ಯಾಮೆಲ್ಲೆ ಎಂಬ ಕೂದಲುಳ್ಳ ರಚನೆಯು ಸಹಾಯ ಮಾಡುತ್ತವೆ. ಫ್ಲೆಮಿಂಗೊಗಳಲ್ಲಿ ಗಂಡು ಮತ್ತು ಹೆಣ್ಣು ಎರಡೂ ಸಹ ಗೂಡುಕಟ್ಟುವಲ್ಲಿ, ಮೊಟ್ಟೆ ಹಾಗು ಗೂಡನ್ನು ಸಂರಕ್ಷಿಸುವುದರಲ್ಲಿ ಜೊತೆಯಾಗಿರುತ್ತವೆ.



**ನೀಲಕಂಠ** **© ಸೇಪುರಿ ಸಾಯಿ ಅಖಿಲ್ ತೇಜ**

ನೀಲಕಂಠ ಪಕ್ಷಿಯು ಕರ್ನಾಟಕ, ಆಂಧ್ರಪ್ರದೇಶ, ಬಿಹಾರ ಮತ್ತು ಒಡಿಶಾ ರಾಜ್ಯದ ರಾಜ್ಯ ಪಕ್ಷಿಯಾಗಿರುತ್ತದೆ. ಇದು ಪಾರಿವಾಳಕ್ಕಿಂತ ಸಣ್ಣದಾದ ಪಕ್ಷಿಯಾಗಿದೆ ತಲೆ, ರೆಕ್ಕೆಯು ತಿಳಿ ನೀಲಿಯಾಗಿದ್ದು ಕತ್ತು ಮತ್ತು ಎದೆ ಕಂದು ಬಣ್ಣವಿದೆ. ನೀಲಕಂಠ ಪಕ್ಷಿಯು ಕೃಷಿಭೂಮಿ, ಕುರುಚಲು ಕಾಡುಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ವಿದ್ಯುತ್ ತಂತಿಗಳು, ಮರಗಳು, ಬಂಡೆಗಳು ಹಾಗೂ ಕಂಬಗಳಲ್ಲಿ ಕುಳಿತಿರುವುದನ್ನು ನಾವು ಸಾಮಾನ್ಯವಾಗಿ ಕಾಣಬಹುದು. ವರ್ಷದ ಮಾರ್ಚಿಯಿಂದ ಜುಲೈ ತಿಂಗಳವರೆಗೂ ಇದರ ಸಂತಾನೋತ್ಪತ್ತಿ ಸಮಯವಾಗಿದ್ದು; ಮರದ ಪೊಟರೆಯಲ್ಲಿ ಮೃದುವಾದ ವಸ್ತುಗಳನ್ನು ಸಂಗ್ರಹಿಸಿ 4-5 ಮೊಟ್ಟೆಗಳನ್ನಿಟ್ಟು 15-18 ದಿನಗಳ ಕಾಲ ಕಾವು ಕೊಟ್ಟು ಮರಿ ಮಾಡುತ್ತವೆ. ಹಿಂದೂ ದಂತಕಥೆಗಳಿಗೆ ಸಂಬಂಧಿಸಿದಂತೆ ಇದು ವಿಷ್ಣುವಿಗೆ ಪವಿತ್ರವಾದುದು ಎಂದು ಹೇಳಲಾಗುತ್ತದೆ, ಅಲ್ಲದೇ ದಸರಾ ಅಥವಾ ದುರ್ಗಾ ಪೂಜೆಯ ಹಬ್ಬದ ಕೊನೆಯ ದಿನದಲ್ಲಿ ಇದನ್ನು ಹಿಡಿದು ಬಿಡುಗಡೆ ಮಾಡಲಾಗುತ್ತಿತ್ತು.



**ಹೂಗುಬ್ಬಿಯು** © **ಸೇಪುರಿ ಸಾಯಿ ಅಖಿಲ್ ತೇಜ**

ಹೂಗುಬ್ಬಿಯು ಭಾರತ, ಶ್ರೀಲಂಕಾ ಮತ್ತು ಬಾಂಗ್ಲಾದೇಶದಲ್ಲಿ ಕಂಡುಬರುವ ಅತೀ ಪುಟ್ಟ ಪಕ್ಷಿಯಾಗಿದ್ದು ಇದು ಸುಮಾರು 8 ಸೆಂ.ಮೀ. ಇರುತ್ತದೆ. ಇವುಗಳು ಹೂವಿನ ಮಕರಂದ ಹಾಗು ಹಣ್ಣುಗಳನ್ನು ಆಹಾರವನ್ನಾಗಿ ಅವಲಂಬಿಸಿವೆ. ಇವುಗಳು ಹೆಚ್ಚಾಗಿ ಲೊರಾಂತಸ್ ಎಂಬ ಅರೆ ಪರಾವಲಂಬಿ ಸಸ್ಯದ ಹಣ್ಣನ್ನು ತಿನ್ನುತ್ತವೆ, ಲೊರಾಂತಸ್ ಸಸ್ಯದ ಬೀಜ ಪ್ರಸರಣೆಯನ್ನು ಇವುಗಳು ಬಿಟ್ಟರೆ ಇನ್ನು ಯಾವುದೇ ಪಕ್ಷಿಗಳು ಮಾಡುವುದಿಲ್ಲ. ಕಾರಣ ಈ ಸಸ್ಯದ ಹಣ್ಣು ಅಂಟಂಟು ಇರುವುದರಿಂದ ಬೇರೆ ಯಾವ ಪಕ್ಷಿಯು ತಿನ್ನಲು ಇಚ್ಛಿಸುವುದಿಲ್ಲ. ಈ ಲೊರಾಂತಸ್ ಸಸ್ಯವನ್ನು ಕಾಡು ತ್ರಿವರ್ಣೆ ಚಿಟ್ಟೆಯು ಅತಿಥೇಯ ಸಸ್ಯವನ್ನಾಗಿಸಿದೆ. ಒಂದು ಪುಟ್ಟ ಪಕ್ಷಿಯು ಒಂದು ಪ್ರಭೇದದ ಸುಂದರ ಚಿಟ್ಟೆಯ ಜೀವನಕ್ಕೆ ಕಾರಣವಾಗಿದೆ ಎಂಬುದು ಎಷ್ಟು ಸಂತೋಷದ ವಿಷಯವಲ್ಲವೆ. ಬದನಿಕೆ ಹಕ್ಕಿಯು ವರ್ಷದ ಫೆಬ್ರುವರಿ ಇಂದ ಜೂನ್ ವರೆಗೆ ಸುಮಾರು 3 ಮೊಟ್ಟೆಗಳನ್ನಿಟ್ಟು ಮರಿಮಾಡುತ್ತವೆ.



**ಹಳದಿ ಕೊಕ್ಕಿನ ಹರಟೇಮಲ್ಲ** **© ಸೇಪುರಿ ಸಾಯಿ ಅಖಿಲ್ ತೇಜ**

ಹಳದಿ ಕೊಕ್ಕಿನ ಹರಟೇಮಲ್ಲ, ಹೆಸರೇ ಹೇಳುವಂತೆ ಇವುಗಳು ಸಾಮಾನ್ಯವಾಗಿ ಗುಂಪುಗಳಲ್ಲಿ ಗದ್ದಲ ಮಾಡುತ್ತ ಪೊದೆಗಳಿಂದ ಪೊದೆಗಳಿಗೆ ಹಾರಾಡುವುದನ್ನು ನಾವು ಕಾಣಬಹುದು. ಇವುಗಳು ಮೂಲತಃ ದಕ್ಷಿಣ ಭಾರತ ಮತ್ತು ಶ್ರೀಲಂಕಾದಲ್ಲಿ ಕಂಡು ಬರುತ್ತವೆ. ಈ ಪಕ್ಷಿಗಳ ಮೇಲ್ಭಾಗವು ಕಂದು ಬಣ್ಣದ್ದಾಗಿದ್ದು, ಕೊರಳು ಮತ್ತು ಎದೆ ಬೂದು ಬಣ್ಣದ್ದಾಗಿರುತ್ತದೆ ಹಾಗೂ ಕಾಲು ಮತ್ತು ಕೊಕ್ಕುಗಳು ಹಳದಿಬಣ್ಣದಲ್ಲಿರುತ್ತವೆ. ಇವುಗಳು ಸಾಮಾನ್ಯವಾಗಿ ಕೀಟಗಳನ್ನು ತಿನ್ನುತ್ತವಾದರೂ ಹಣ್ಣು, ಜೇನುತುಪ್ಪ ಮತ್ತು ಮನುಷ್ಯರು ಬಿಸಾಡಿದ ಆಹಾರ ಪದಾರ್ಥಗಳನ್ನೂ ಇವು ಸೇವಿಸುತ್ತವೆ. ಈ ಹಳದಿ ಕೊಕ್ಕಿನ ಹರಟೇಮಲ್ಲ ಹಕ್ಕಿಗಳು ಸುಮಾರು 4 ತಿಳಿ ಹಳದಿ ಮೊಟ್ಟೆಗಳನ್ನು ಇಟ್ಟು 14 ರಿಂದ 16 ದಿನಗಳ ಕಾಲ ಕಾವು ಕೊಟ್ಟು ಮರಿ ಮಾಡುತ್ತವೆ.

**ಛಾಯಾಚಿತ್ರ: ಸೇಪುರಿ ಸಾಯಿ ಅಖಿಲ್ ತೇಜ**

**ಲೇಖನ: ಧನರಾಜ್ ಎಂ.**

# ನೀವೂ ಕಾನನಕ್ಕೆ ಬರೆಯಬಹುದು




ಬೆಟ್ಟಗುಡ್ಡ, ಕಣಿವೆಗಳು, ಮುಗಿಲೆತ್ತರದ ಪರ್ವತಗಳು, ಈ ಭೂಮಿಯ ಸೊಬಗನ್ನು ಹೆಚ್ಚಿಸುವ ಒಡವೆಗಳು. ಪ್ರಕೃತಿಯ ಸೌಂದರ್ಯರಾಶಿಯ ಆಕರಗಳಲ್ಲಿ ಒಂದೊಂದೂ ಒಂದೊಂದು ರೀತಿಯ ವಿಸ್ಮಯ!.

ನಿಸರ್ಗದಲ್ಲಿ ಕಿರೀಟದಂತೆ ಕಂಗೊಳಿಸುವ ಪರ್ವತಗಳು ಪರಿಸರ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಭೂಖಂಡದ ಮೇಲ್ಮೈ ಶೇ 26.5 ಪರ್ವತಗಳಿಂದ ಆವೃತವಾಗಿದೆ, ಅಲ್ಲಿರುವ ನೀರು, ಶುದ್ಧಗಾಳಿ, ವೈವಿಧ್ಯತೆ, ದೃಶ್ಯಗಳು ಗಮನ ಸೆಳೆಯುತ್ತವೆ. ಸಿಹಿ ನೀರಿನ ಅಗತ್ಯಗಳನ್ನು ಪೂರೈಸುವ ನೀರಿನ ಗೋಪುರಗಳಾಗಿವೆ.

ಪಟ್ಟು ಪರ್ವತಗಳು (ಮಡಿಸಿದ ಪರ್ವತಗಳು), ಬ್ಲಾಕ್ ಪರ್ವತಗಳು, ಗುಮ್ಮಟ ಪರ್ವತಗಳು, ಜ್ವಾಲಾಮುಖಿ ಪರ್ವತಗಳು ಮತ್ತು ಪ್ರಸ್ಥಭೂಮಿ ಪರ್ವತಗಳು ಇದ್ದು ಅನೇಕ ಪ್ರಭೇದದ ಪ್ರಾಣಿ-ಪಕ್ಷಿಗಳಿಗೆ, ಜೀವಿಗಳಿಗೆ ಆಶ್ರಯವನ್ನು ಒದಗಿಸಿ, ಪರಿಸರ ವ್ಯವಸ್ಥೆಯ ಸಮತೋಲನವನ್ನು ಕಾಪಾಡುತ್ತಿದೆ. ಕಡಿಮೆ ಎತ್ತರದಲ್ಲಿರುವ ಪರ್ವತಗಳು ಅಸಾಧಾರಣ ಜೀವವೈವಿಧ್ಯತೆಯನ್ನು ಬೆಂಬಲಿಸುತ್ತವೆ, ಇತ್ತೀಚೆಗೆ ನಗರೀಕರಣ, ಕೈಗಾರೀಕರಣಗಳು ಪರ್ವತಗಳೆಡೆಗೆ ಮುಖ ಮಾಡುತ್ತಿರುವುದರಿಂದ ನೈಸರ್ಗಿಕ ವರದಾನವಾದ ಪರ್ವತಗಳನ್ನು ಉಳಿಸಿಕೊಳ್ಳುವುದು ಅನಿವಾರ್ಯವಾಗಿದೆ. ಇಂತಹ ಪರ್ವತಗಳ ಪ್ರಾಮುಖ್ಯತೆಯನ್ನು ತಿಳಿಸಲು ಮತ್ತು ಜಾಗೃತಿ ಮೂಡಿಸಲು ಡಿಸೆಂಬರ್ 11 ಅಂತರರಾಷ್ಟ್ರೀಯ ಪರ್ವತ ದಿನವನ್ನಾಗಿ ಆಚರಿಸಲಾಗುತ್ತದೆ.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಪ್ರತಿಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.magwork@gmail.com

**ಅಂಚೆ ವಿಳಾಸ**:

Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.